# ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 593 |
| 2 | ಸದಸ್ಯರ ಹೆಸರು | : | ಶ್ರೀ ಆರ್. ಧರ್ಮಸೇನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| 3 | ಉತ್ತರಿಸುವ ದಿನಾಂಕ | : | 16-09-2021 |
| 4 | ಉತ್ತರಿಸುವವರು | : | ಮುಖ್ಯಮಂತ್ರಿಗಳು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರು ನಗರದಲ್ಲಿ ಮುಖ್ಯ ರಸ್ತೆಗಳ ಹಿಂಭಾಗದಲ್ಲಿರುವ ಸಣ್ಣ ಸಣ್ಣ ರಸ್ತೆಗಳಿಗೆ (ಕನ್ಸರ್ವೆನ್ಸಿ ರಸ್ತೆ) ಗೇಟುಗಳನ್ನು ಅಳವಡಿಸಲಾಗಿದ್ದು, ಅವುಗಳನ್ನು ಬಿ.ಬಿ.ಎಂ.ಪಿ ವತಿಯಿಂದ ಅಥವಾ ಖಾಸಗಿಯವರಿಂದ ಅಳವಡಿಸಲಾಗಿದೆಯೇ; | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಬರುವ ಮಹದೇವಪುರ ವಲಯ, ದಾಸರಹಳ್ಳಿ ವಲಯ, ರಾಜರಾಜೇಶ್ವರಿನಗರ ವಲಯ, ಬೊಮ್ಮನಹಳ್ಳಿ ವಲಯ, ಯಲಹಂಕ ವಲಯ, ಪೂರ್ವ ವಲಯ ಮತ್ತು ಪಶ್ಚಿಮ ವಲಯಗಳಲ್ಲಿ ಇಂತಹ ಯಾವುದೇ ಪ್ರಕರಣಗಳು ಇರುವುದಿಲ್ಲ. |
| ಆ | ಸಣ್ಣ ರಸ್ತೆಗಳಲ್ಲೂ ಮನೆಗಳಿದ್ದು, ರಾತ್ರಿ ವೇಳೆ ಗೇಟುಗಳನ್ನು ಮುಚ್ಚುವುದರಿಂದ ಅಲ್ಲಿನ ನಿವಾಸಿಗಳಿಗೆ ತೊಂದರೆ ಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಿಬಿಎಂಪಿ ವ್ಯಾಪ್ತಿಯಲ್ಲಿ ಬರುವ ದಕ್ಷಿಣ ವಲಯದ ಚಿಕ್ಕಪೇಟೆ ವಿಭಾಗದ ವಾರ್ಡ್ ಸಂಖ್ಯೆ: 142 ರಲ್ಲಿ 12 ಮತ್ತು 143 ರಲ್ಲಿ 10 ಗೇಟ್‌ಗಳು ಹೀಗೆ ಒಟ್ಟು 22 ಗೇಟುಗಳನ್ನು ಅಳವಡಿಸಲಾಗಿದ್ದು, ಸದರಿ ವಿಭಾಗದ ಸಣ್ಣ ಸಣ್ಣ ರಸ್ತೆಗಳಲ್ಲಿ (ಕನ್ಸರ್ವೆನ್ಸಿ ಜಾಗ) ಸಾರ್ವಜನಿಕರು ಮಲಮೂತ್ರ ವಿಸರ್ಜನೆ ಹಾಗೂ ಇನ್ನಿತರೆ ಅನೈತಿಕ ಚಟುವಟಿಕೆಗಳನ್ನು ತಡೆಗಟ್ಟುವ ಸಲುವಾಗಿ ತಾತ್ಕಾಲಿಕವಾಗಿ ಕಬ್ಬಿಣದ ಗೇಟ್‌ಗಳನ್ನು ಅಳವಡಿಸಿಕೊಂಡಿರುವುದು ಕಂಡುಬಂದಿರುತ್ತದೆ. ಕನ್ಸರ್ವೆನ್ಸಿ ಜಾಗದಲ್ಲಿ ಕೇವಲ ಒಳಚರಂಡಿ, ನೀರಿನ ಸಂಪರ್ಕ, ವಿದ್ಯುತ್ ಸಂಪರ್ಕ ಹಾಗೂ ಇನ್ನಿತರೆ ಮೂಲಭೂತ ಸೌಕರ್ಯಗಳನ್ನು ಅಳವಡಿಸಿಕೊಳ್ಳಲು ಮಾತ್ರ ಅವಕಾಶವಿರುತ್ತದೆ. ಯಾವುದೇ ಸಾರ್ವಜನಿಕರ ಓಡಾಟಕ್ಕಾಗಲೀ, ವಾಹನ ಓಡಾಟಕ್ಕಾಗಲೀ ಬಳಕೆಯಾಗುತ್ತಿರುವುದಿಲ್ಲ. ರಾತ್ರಿಯ ಸಮಯದಲ್ಲಿ ಮಲಮೂತ್ರ ವಿಸರ್ಜನೆ ಹಾಗೂ ಇನ್ನಿತರೆ ಅನೈತಿಕ ಚಟುವಟಿಕೆಗಳನ್ನು ತಡೆಗಟ್ಟುವ ಸಲುವಾಗಿ ಸ್ಥಳೀಯ ಸಾರ್ವಜನಿಕರ ಕೋರಿಕೆಯ ಮೇರೆಗೆ, ಸ್ಥಳೀಯರ ಸುರಕ್ಷತೆಯ ಹಿತದೃಷ್ಟಿಯಿಂದ ಸದರಿ ಕನ್ಸರ್ವೆನ್ಸಿ ಜಾಗದಲ್ಲಿನ ಗೇಟುಗಳನ್ನು ತೆರವುಗೊಳಿಸಿರುವುದಿಲ್ಲ.<br><br>ಬಿ.ಟಿ.ಎಂ ಲೇಔಟ್ ವಿಭಾಗ ವಾರ್ಡ್ ಸಂಖ್ಯೆ: 148 ರಲ್ಲಿ 01 ಗೇಟ್‌ನ್ನು ಈ ಹಿಂದೆ ನ್ಯಾಷನಲ್ ಗೇಮ್ಸ್ ವಿಲೇಜ್ (ಎನ್.ಜಿ.ವಿ.) ಪ್ರದೇಶದಲ್ಲಿ ಕರ್ನಾಟಕ ಗೃಹ ಮಂಡಳಿ ವತಿಯಿಂದ |

. . .2/-

| | | |
|---|---|---|
| | | ಅಳವಡಿಸಲಾಗಿದ್ದು, ಬಿ.ಬಿ.ಎಂ.ಪಿ ವತಿಯಿಂದ ಸದರಿ ಗೇಟನ್ನು ತೆರೆದು ಸಾರ್ವಜನಿಕರ ಹಾಗೂ ವಾಹನ ಸಂಚಾರಕ್ಕೆ ಅವಕಾಶ ನೀಡಲಾಗಿರುತ್ತದೆ. ಎನ್.ಜಿ.ವಿ ಪ್ರದೇಶದ ಮತ್ತು ಗೇಟನ್ನು ಕರ್ನಾಟಕ ಗೃಹ ಮಂಡಳಿ ವತಿಯಿಂದಲೇ ನಿರ್ವಹಣೆ ಮಾಡಲಾಗುತ್ತಿದೆ. |
| ಇ | ಸಾರ್ವಜನಿಕ ರಸ್ತೆಗಳಿಗೆ ಗೇಟುಗಳನ್ನು ಅಳವಡಿಸಿದ್ದರೂ ಬಿ.ಬಿ.ಎಂ.ಪಿ ಅಧಿಕಾರಿಗಳು ಕ್ರಮ ಕೈಗೊಳ್ಳದಿರಲು ಕಾರಣವೇನು; ಸರ್ವೆ ಮಾಡಿ ಈ ಗೇಟುಗಳನ್ನು ತೆರವುಗೊಳಿಸಲು ಅಧಿಕಾರಿಗಳಿಗೆ ನಿರ್ದೇಶನ ನೀಡಲಾಗುವುದೇ? | ಪಾಲಿಕೆ ವ್ಯಾಪ್ತಿಯ ಒಟ್ಟು 08 ವಲಯಗಳ ಪೈಕಿ ದಕ್ಷಿಣ ವಲಯದಲ್ಲಿ ಚಿಕ್ಕಪೇಟೆ ವಿಭಾಗದಲ್ಲಿ 22 ಮತ್ತು ಪದ್ಮನಾಭನಗರ ವಿಭಾಗದಲ್ಲಿ 10 ಗೇಟ್‌ಗಳನ್ನು ಅಳವಡಿಸಲಾಗಿದ್ದು, ಸದರಿ ಗೇಟ್‌ಗಳು ಸಣ್ಣ ಸಣ್ಣ ರಸ್ತೆಗಳಲ್ಲಿ (ಕನ್ಸರ್ವೆನ್ಸಿ ಜಾಗ) ಸಾರ್ವಜನಿಕರು ಮಲಮೂತ್ರ ವಿಸರ್ಜನೆ ಹಾಗೂ ಇನ್ನಿತರೆ ಅನೈತಿಕ ಚಟುವಟಿಕೆಗಳನ್ನು ತಡೆಗಟ್ಟುವ ಸಲುವಾಗಿ ತಾತ್ಕಾಲಿಕವಾಗಿ ಕಬ್ಬಿಣದ ಗೇಟ್‌ಗಳನ್ನು ಅಳವಡಿಸಿಕೊಂಡಿರುವುದು ಕಂಡುಬಂದಿರುತ್ತದೆ. ಕನ್ಸರ್ವೆನ್ಸಿ ಜಾಗದಲ್ಲಿ ಕೇವಲ ಒಳಚರಂಡಿ, ನೀರಿನ ಸಂಪರ್ಕ, ವಿದ್ಯುತ್ ಸಂಪರ್ಕ ಹಾಗೂ ಇನ್ನಿತರ ಮೂಲಭೂತ ಸೌಕರ್ಯಗಳನ್ನು ಅಳವಡಿಸಿಕೊಳ್ಳಲು ಮಾತ್ರ ಅವಕಾಶವಿರುತ್ತದೆ ಮತ್ತು ಯಾವುದೇ ಸಾರ್ವಜನಿಕರ ಓಡಾಟಕ್ಕಾಗಲೀ, ವಾಹನ ಓಡಾಟಕ್ಕಾಗಲೀ ಬಳಕೆಯಾಗುತ್ತಿರುವುದಿಲ್ಲ. ರಾತ್ರಿಯ ಸಮಯದಲ್ಲಿ ಮಲಮೂತ್ರ ವಿಸರ್ಜನೆ ಹಾಗೂ ಇನ್ನಿತರೆ ಅನೈತಿಕ ಚಟುವಟಿಕೆಗಳನ್ನು ತಡೆಗಟ್ಟುವ ಸಲುವಾಗಿ ಸ್ಥಳೀಯ ಸಾರ್ವಜನಿಕರ ಕೋರಿಕೆಯ ಮೇರೆಗೆ, ಸ್ಥಳೀಯರ ಸುರಕ್ಷತೆಯ ಹಿತದೃಷ್ಟಿಯಿಂದ ಸದರಿ ಕನ್ಸರ್ವೆನ್ಸಿ ಜಾಗದಲ್ಲಿನ ಗೇಟುಗಳನ್ನು ತೆರವುಗೊಳಿಸಲಾಗಿರುವುದಿಲ್ಲ ಹಾಗೂ ಬಿ.ಟಿ.ಎಂ.ಲೇಔಟ್ ವಿಭಾಗ ವಾರ್ಡ್ ಸಂಖ್ಯೆ: 148ರಲ್ಲಿ 01 ಗೇಟ್‌ನ್ನು ಈ ಹಿಂದೆ ಎನ್.ಜಿ.ವಿ ಪ್ರದೇಶದಲ್ಲಿ ಕೆ.ಹೆಚ್.ಬಿ ಇಲಾಖೆಯಿಂದ ಅಳವಡಿಸಲಾಗಿದ್ದು, ಬಿ.ಬಿ.ಎಂ.ಪಿ. ವತಿಯಿಂದ ಗೇಟ್‌ಗಳನ್ನು ತೆರೆದು ಸಾರ್ವಜನಿಕರ ಹಾಗೂ ವಾಹನ ಸಂಚಾರಕ್ಕೆ ಅವಕಾಶ ನೀಡಲಾಗಿರುತ್ತದೆ. |

**ಸಂಖ್ಯೆ: ನಅಇ 218 ಎಂಎನ್‌ವೈ 2021 (ಇ)**

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ